# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2 (61) |
| ಸದಸ್ಯರ ಹೆಸರು | ಶ್ರೀ ನಿರಾಣಿ ಹಣಮಂತ ರುದ್ರಪ್ಪ (ಪದವೀಧರರ ಕ್ಷೇತ್ರ) |
| ಉತ್ತರಿಸುವ ದಿನಾಂಕ | 13.12.2021. |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಕಟ್ಟಡ ನಿರ್ಮಾಣಕ್ಕಾಗಿ ಪ್ರತ್ಯೇಕವಾಗಿ 126.7 ಎಕರೆ ಜಾಗವನ್ನು ಸರ್ಕಾರ ನೀಡಿದ್ದು, ಸದರಿ ಜಾಗದಲ್ಲಿ ಕಟ್ಟಡ ನಿರ್ಮಾಣ ಮಾಡಲು ಮಂಜೂರಾದ ಹಣ ಎಷ್ಟು; ನೀಡಲಾದ ಹಣದಲ್ಲಿ ಕಟ್ಟಡ ನಿರ್ಮಾಣ ಪ್ರಾರಂಭವಾಗಿದೆಯೇ;<br>ಹಾಗಿದ್ದಲ್ಲಿ, ನಿರ್ಮಾಣ ಯಾವ ಹಂತದಲ್ಲಿದೆ; (ಮಾಹಿತಿ ನೀಡುವುದು) | ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ ಈ ವಿಶ್ವವಿದ್ಯಾಲಯಕ್ಕೆ ಬೆಳಗಾವಿ ತಾಲ್ಲೂಕು ಹಿರೇಬಾಗೇವಾಡಿ ಗ್ರಾಮ ಹಾಗೂ ಸಮೀಪದ ಗ್ರಾಮದಲ್ಲಿ ಮಂಜೂರಾಗಿರುವ ಒಟ್ಟು 126.27 ಎಕರೆ ಜಮೀನಿನಲ್ಲಿ ಕ್ಯಾಡ್ ಫೋರಮ್, ಮೈಸೂರು ಇವರಿಂದ ಸಿದ್ಧಪಡಿಸಲಾದ ನಕ್ಷೆ ಮತ್ತು ಅಂದಾಜು ಪಟ್ಟಿಯಲ್ಲಿ ರೂ.110.00ಕೋಟಿಗಳ (ಒಂದು ನೂರ ಹತ್ತು ಕೋಟಿ ರೂಪಾಯಿ ಮಾತ್ರ) ವಿವರವಾದ ಯೋಜನಾ ವರದಿಯಂತೆ ಕಟ್ಟಡ ಕಾಮಗಾರಿ, ಮೂಲಭೂತ ಸೌಲಭ್ಯಗಳಿಗೆ ಸಂಬಂಧಿತ ವೆಚ್ಚವನ್ನು ವಿಶ್ವವಿದ್ಯಾಲಯದ ಆಂತರಿಕ ಸಂಪನ್ಮೂಲದಿಂದಲೇ ಭರಿಸುವ ಹಾಗೂ ಸರ್ಕಾರದಿಂದ ಯಾವುದೇ ಆರ್ಥಿಕ ಸಹಾಯವನ್ನು/ ಅನುದಾನವನ್ನು ಕೋರತಕ್ಕದ್ದಲ್ಲ ಎಂಬ ಷರತ್ತಿಗೊಳಪಟ್ಟು ಸದರಿ ಕಾಮಗಾರಿಯನ್ನು ರಾಜ್ಯ ಸರ್ಕಾರದ ಸಂಸ್ಥೆಯಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇಂಜಿನಿಯರಿಂಗ್ ವಿಭಾಗ (ಕೆ.ಹೆಚ್.ಎಸ್.ಡಿ.ಆರ್.ಪಿ), ಬೆಂಗಳೂರು ಇವರ ವತಿಯಿಂದ ಕೈಗೊಳ್ಳಲು ಸರ್ಕಾರದ ಆದೇಶ ಸಂಖ್ಯೆ: ಇಡಿ 26 ಹೆಚ್‌ಪಿಯು 2021, ದಿನಾಂಕ: 01.07.2021ರನ್ವಯ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ. |

| | | |
|---|---|---|
| ಆ) | ಕಟ್ಟಡ ನಿರ್ಮಾಣ ಪ್ರಾರಂಭವಾಗದಿದ್ದಲ್ಲಿ ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲಾಗುವುದು? (ಮಾಹಿತಿ ನೀಡುವುದು) | ಕಟ್ಟಡ ಪೂರ್ಣಗೊಳಿಸಲು 18 ತಿಂಗಳುಗಳ ಕಾಲಾವಕಾಶ ನೀಡಿದ್ದು, ಟೆಂಡರ್ ಪ್ರಕ್ರಿಯೆ ಪ್ರಾರಂಭಿಸಲಾಗುತ್ತಿದೆ. |

ಸಂಖ್ಯೆ: ಇಡಿ 120 ಹೆಚ್‌ಪಿಯು 2021)

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು
ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು
ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು.